# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 82
2. ಸದಸ್ಯರ ಹೆಸರು : ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ.
3. ಉತ್ತರಿಸುವ ಸಚಿವರು : ಮಾನ್ಯ ತೋಟಗಾರಿಕೆ ಸಚಿವರು
4. ಉತ್ತರಿಸಬೇಕಾದ ದಿನಾಂಕ : 15-07-2019

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕೊಡಗು ಜಿಲ್ಲೆಯಲ್ಲಿರುವ ತೋಟಗಾರಿಕಾ ಇಲಾಖೆಯ ನರ್ಸರಿಗಳ ಸಂಖ್ಯೆ ಎಷ್ಟು (ಅವುಗಳ ಸ್ಥಳಗಳ ಹೆಸರುಗಳು ಮತ್ತು ವಿಸ್ತೀರ್ಣದ ವಿವರಗಳನ್ನು ನೀಡುವುದು) | ಕೊಡಗು ಜಿಲ್ಲೆಯಲ್ಲಿ ತೋಟಗಾರಿಕೆ ಇಲಾಖೆಯ ನರ್ಸರಿಗಳ ಸಂಖ್ಯೆ ಹತ್ತು. ಅವುಗಳ ವಿವರಗಳು ಈ ಕೆಳಕಂಡಂತಿವೆ. (ಕೆಳಗಿನ ಕೋಷ್ಟಕ ನೋಡಿ) |
| ಆ | ಜಿಲ್ಲೆಯಲ್ಲಿರುವ ತೋಟಗಾರಿಕೆ ಇಲಾಖೆಯ ಯಾವುದಾದರೂ ಜಾಗಗಳನ್ನು ಖಾಸಗಿಯವರು ಒತ್ತುವರಿ ಮಾಡಿರುವ ಪ್ರಕರಣಗಳಿವೆಯೇ; ಇದ್ದಲ್ಲಿ ಅವುಗಳನ್ನು ತೆರವುಗೊಳಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | ತೋಟಗಾರಿಕೆ ಇಲಾಖೆಯ ಜಾಗವನ್ನು ಖಾಸಗಿಯವರು ಒತ್ತುವರಿ ಮಾಡಿರುವ ಪ್ರಕರಣಗಳು ಇರುವುದಿಲ್ಲ. |
| ಇ | ತೋಟಗಾರಿಕೆ ಇಲಾಖೆಯ ನರ್ಸರಿಗಳನ್ನು ಅಭಿವೃದ್ಧಿಪಡಿಸಲು ಸರ್ಕಾರದ ಮುಂದಿರುವ ಕ್ರಮಗಳೇನು? (ವಿವರ ನೀಡುವುದು). | ತೋಟಗಾರಿಕೆ ಇಲಾಖೆಯ ನರ್ಸರಿಗಳಲ್ಲಿ ಈ ಕೆಳಕಾಣಿಸಿದ ಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ:<br>1. ಸಸ್ಯೋತ್ಪಾದನೆ: ರೈತರಿಗೆ ಯೋಗ್ಯ ದರದಲ್ಲಿ ಉತ್ತಮ ಗುಣಮಟ್ಟದ ಕಸಿ/ಸಸಿಗಳನ್ನು ಒದಗಿಸಲು ಅನುವಾಗುವಂತೆ ಆ ಪ್ರದೇಶದಲ್ಲಿ ಬೇಡಿಕೆ ಇರುವ ತೋಟಗಾರಿಕೆ ಬೆಳೆಗಳ ಸಸ್ಯೋತ್ಪಾದನೆ ಮಾಡುವುದು.<br>2. ತೋಟಗಾರಿಕೆ ಇಲಾಖೆಯ ಕ್ಷೇತ್ರ/ ನರ್ಸರಿಗಳಲ್ಲಿ ವಿವಿಧ ತೋಟಗಾರಿಕೆ ಬೆಳೆಗಳನ್ನು ನಾಟಿ ಮಾಡಿ, ಪೋಷಿಸಿ ಪ್ರದೇಶ ವಿಸ್ತರಣೆ ಮಾಡುವುದು.<br>3. ಕ್ಷೇತ್ರ/ನರ್ಸರಿಗಳಲ್ಲಿ ಗ್ಯಾಪ್ ಫಿಲಿಂಗ್, ಹನಿನೀರಾವರಿ ಅಳವಡಿಕೆ, ಅನುತ್ಪಾದಕ ಮರಗಳನ್ನು ತೆಗೆಯುವುದು, ಅನುತ್ಪಾದಕ ರಂಭೆಗೊಂಬೆಗಳನ್ನು ಕತ್ತರಿಸುವುದು, canopy management, ರಸಗೊಬ್ಬರ ನಿರ್ವಹಣೆ, ಸಸ್ಯಸಂರಕ್ಷಣೆ ನಿರ್ವಹಣೆ ಮಾಡುವುದರ ಮೂಲಕ ಅಭಿವೃದ್ಧಿಪಡಿಸುವುದು.<br>4. ಕ್ಷೇತ್ರ/ನರ್ಸರಿಗಳಲ್ಲಿ ಮಣ್ಣು ಮತ್ತು ನೀರಿನ ಸಂರಕ್ಷಣೆ ಕ್ರಮಕೈಗೊಳ್ಳುವುದು.<br>5. ಕ್ಷೇತ್ರ/ನರ್ಸರಿಗಳ ಸಂರಕ್ಷಣೆಗಾಗಿ ಮತ್ತು ನಿರ್ವಹಣೆಗಾಗಿ ಮೂಲಭೂತ ಸೌಲಭ್ಯಗಳಾದ ಕಾಂಪೌಂಡ್ ಗೋಡೆ, ನೆರಳುಪರದೆ, ಹಸಿರುಮನೆ, ಕೊಳವೆ ಬಾವಿ, ದಾಸ್ತಾನು ಕೊಠಡಿ ಇತ್ಯಾದಿ ಕ್ರಮಗಳನ್ನು ಕೈಗೊಳ್ಳುವುದು.<br>6. ಹೊಸ ತಳಿಗಳನ್ನು ನೆಡುವ ಮೂಲಕ ಪರಿಚಯಿಸಿ ನಿರ್ವಹಿಸಲಾಗುತ್ತಿದೆ.<br>7. ಮಾದಾಲಾಪುರ, ಹಾರಂಗಿ ಮತ್ತು ಆರವತ್ತೊಕ್ಲು ಕ್ಷೇತ್ರಗಳನ್ನು ಮಾದರಿ ತೋಟಗಾರಿಕೆ ಕ್ಷೇತ್ರಗಳನ್ನಾಗಿ ಅಭಿವೃದ್ಧಿಪಡಿಸಲಾಗುತ್ತಿದೆ. |

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ/ಸಸ್ಯಾಗಾರದ ಹೆಸರು | ತಾಲ್ಲೂಕು | ವಿಸ್ತೀರ್ಣ (ಎಕರೆ; ಗುಂಟೆಗಳಲ್ಲಿ) |
|---|---|---|---|
| 1 | ಹಾರಂಗಿ ತೋಟಗಾರಿಕೆ ಕ್ಷೇತ್ರ | ಸೋಮವಾರಪೇಟೆ | 123.00 |
| 2 | ಮದಲಾಪುರ ತೋಟಗಾರಿಕೆ ಕ್ಷೇತ್ರ | ಸೋಮವಾರಪೇಟೆ | 100.00 |
| 3 | ಮಾದಾಪುರ ತೋಟಗಾರಿಕೆ ಕ್ಷೇತ್ರ | ಸೋಮವಾರಪೇಟೆ | 246.34 |
| 4 | ಪೊನ್ನಂಪೇಟೆ ತೋಟಗಾರಿಕೆ ಕ್ಷೇತ್ರ | ವಿರಾಜಪೇಟೆ | 8.22 |
| 5 | ನಾಪೋಕ್ಲು ತೋಟಗಾರಿಕೆ ಕ್ಷೇತ್ರ | ಮಡಿಕೇರಿ | 30.00 |
| 6 | ಬಳಗುಂದ ತೋಟಗಾರಿಕೆ ಕ್ಷೇತ್ರ | ಸೋಮವಾರಪೇಟೆ | 9.00 |
| 7 | ಕೂಡಿಗೆ ಸಸ್ಯ ಕ್ಷೇತ್ರ | ಸೋಮವಾರಪೇಟೆ | 12.36 |
| 8 | ಆರ್ವತೊಕ್ಲು ತೊಟಗಾರಿಕೆ ಕ್ಷೇತ್ರ | ವಿರಾಜಪೇಟೆ | 9.28 |
| 9 | ಕಛೇರಿ ಸಸ್ಯಾಗಾರ | ಮಡಿಕೇರಿ | 2.00 |
| 10 | ತಾಲ್ಲೂಕು ಸಸ್ಯಾಗಾರ | ಸೋಮವಾರಪೇಟೆ | 0.16 |
| | ಒಟ್ಟು | | 542.16 |

ಸಂ: HORTI/63/HGM/2019-admn-Horti-Sec

(ಎಂ.ಸಿ.ಮನಗೂಳಿ)
ತೋಟಗಾರಿಕೆ ಸಚಿವರು

ಎಂ.ಸಿ. ಮನಗೂಳಿ
ತೋಟಗಾರಿಕೆ ಸಚಿವರು